# 106

# ಮುದ್ದೆ ಅವಾಂತರ

(ಏಕಾಂಕ ಪ್ರಹಸನ)



ಪ್ರಹಸನ ರಚಯಿತ:

“ಅಷ್ಟಾವಕ್ರ”, ಬೆಂಗಳೂರು.

**1956.**

ಒಂದಾಣೆ 

ಮಾಲೆ

# 'ಬಂದಾಣೆ ಮಾಲೆ'ಯ ಪ್ರಕಟಣೆಗಳು:

೧*ಕೆಪ್ಪಟಿರಾಯ; ೨ ನಾರೀಶ್ವರರು(ದ್ವಿ.ಮುದ್ರಣ); ೩ ಕಳ್ಳನಿಗೆ ಸಂಭಾವನೆ(ದ್ವಿ.ಮುದ್ರಣ) ೪ *ಸದ್ರಿಸುಬ್ಬ; ೫ ಅದ್ಭುತ ತ್ಯಾಗ (ದ್ವಿ.ಮುದ್ರಣ); ೬ *ಚುನಾವಣೆ ಅರ್ಥಾತ್ ಬನಾವಣೆ; ೭*ಬೀಡಿ ಸೇದಬೇಡಿ ಮತ್ತು ಆ ಮಗು; ೮*ಇಂಗ್ಲಿಷ್–ಕನ್ನಡ ಅರ್ಥಕೋಶ; ೯ ಅಂಚಕ್ಕೆ ಸಂಚಕಾರ(ದ್ವಿ.ಮುದ್ರಣ); ೧೦ *ಟಿಶ್ಯೂ ಔಷಧಿಗಳ ಕೈಪಿಡಿ; ೧೧ *ಶ್ರೀ ಕ್ಷೇತ್ರ ಧರ್ಮಸ್ಥಳ (ತೃ. ಮುದ್ರಣ); ೧೨*ಜೀವದ ಮೌಲ್ಯ ಮತ್ತು ಇತರ ಕಥೆಗಳು; ೧೩ ಸತ್ತವನ ಸೇಡು ಮತ್ತು ಇತರ ಕಥೆಗಳು; ೧೪ *ವೆಂಕಟನ ಸಂಕಟ; ೧೫ ಬಾಬಿಗೆ ಬಾಸಿಂಗ (ದ್ವಿ.ಮುದ್ರಣ); ೧೬ ವೇಣೂರಿನ ಗತವೈಭವ(ದ್ವಿ.ಮುದ್ರಣ); ೧೭ ಒಗಟುಗಳು (ದ್ವಿ.ಮುದ್ರಣ); ೧೮ ಜಗಳಗಂಟಿ ಮತ್ತು ಇತರ ಕಥೆಗಳು; ೧೯ ರಥೋತ್ಸವ; ೨೦ ಕರಿನಾಯಿ ಮತ್ತು ಮುಪ್ಪು; ೨೧ ಭಾರತದ ಮಹಾನಗರ–I(ದ್ವಿ.ಮುದ್ರಣ); ೨೨ ತಿರುಕ್ಕುರಲ್ (ದ್ವಿ.ಮುದ್ರಣ); ೨೩ ಸೂರ್ಯನ ಸಂಸಾರ; ೨೪ ಭಾರತದ ಮಹಾನಗರ–II (ದ್ವಿ.ಮುದ್ರಣ); ೨೫ ಧೈರ್ಯ ಮತ್ತು ಇತರ ಸತ್ಯಕಥೆಗಳು; ೨೬ ಮಾರಿಷತ್ರಾ(ದ್ವಿ.ಮುದ್ರಣ); ೨೭*ಹಾಸವಿಲಾಸ; ೨೮ ಸತ್ಯವಂತ ಬಾಬಿ [ದ್ವಿ.ಮುದ್ರಣ]; ೨೯ ಜಾಣ್ಮೆಯ ಒಗಟುಗಳು ೩೦ ಜಾತಕ ಕಥೆಗಳು; ೩೧ ಕಾರ್ಕಳದ ಚರಿತ್ರೆ; ೩೨ ಮಂಜರಿ; ೩೩ ದರ್ಶನದ ಕಥೆಗಳು; ೩೪ ಅಳುವಿನ ಹೊಳೆ ಮತ್ತು ಕೇಶವಭೂಪ; ೩೫ ಶರಾಬಿನ ಪೀಪಾಯಿಗಳು; ೩೬ ಉಪದೇಶ ಶತಕ; ೩೭ ನಿಮಗೆ ಗೊತ್ತಿದೆಯೇ?; ೩೮ ಚತುರ ಚಮತ್ಕಾರ; ೩೯ ಸತೀ ಸಾವಿತ್ರಿ (ದ್ವಿ.ಮುದ್ರಣ); ೪೦ ಆಭರಣಗಳ ಪೆಟ್ಟಿಗೆ ಮತ್ತು ಇತರ ಕಥೆಗಳು; ೪೧ ಭಾರತದ ಮಂತ್ರಿಮಂಡಲಗಳು(ದ್ವಿ.ಮುದ್ರಣ); ೪೨ ಕಾಲುಬಳೆಯ ಕಥೆ; ೪೩ ಭಾರತದ ನಾಲ್ಕು ಕಲಶಗಳು; ೪೪ ವ್ಯಸನದಿಂದ ಲಾಭ ಮತ್ತು ಇತರ ಕಥೆಗಳು; ೪೫ ಸುಭಾಷಿತ; ೪೬ ೧೮೫೭ರ ಸಿಪಾಯಿದಂಗೆ; ೪೭ ಅಕಾಂಡ ತಾಂಡವ; ೪೮ ಸಾಹಸದ ಕಥೆಗಳು; ೪೯ ಸಂಜ್ಞಾಜ್ಞಾನಕೋಶ; ೫೦ ಪಂಡಿತನ ಪಿಟೀಲು; ೫೧ ಭೋಗಯಾತ್ರೆ; ೫೨ ಸಂಗ್ರಾಮಸಿಂಹ; ೫೩ ಧರ್ಮಶಿಕ್ಷಾ; ೫೪ ಮಹಾತ್ಮ; ೫೫ ಮೀರಾಬಾಯಿ; ೫೬ ವೀರರಮಣಿ ಕರ್ಮದೇವಿ; ೫೭ ಅರಳಿದ ನಗು; ೫೮ ಸಚಿತ್ರ ಜಪಾನ್; ೫೯ ಚುಟ್ಟಬಿಟ್ಟ ಧಿಟ್ಟ; ೬೦ ನಿರಪರಾಧಿ; ೬೧ ಭಕ್ತವಾಣಿ; ೬೨ ಜಾನಪದ ಸಾಹಿತ್ಯ; ೬೩ ಡಾಕ್ಟರ್ ಆರೋಗ್ಯಮ್; ೬೪ ಲೌಕಿಕ ನ್ಯಾಯಗಳು; ೬೫ ಶಿಶುಪಾಲ ಮಾನಭಂಗ; ೬೬ ಜರಾಸಂಧ ವಧೆ; ೬೭ ಜವಾಹರಲಾಲ (ದ್ವಿ.ಮುದ್ರಣ); ೬೮ ಕರುಣೆ ಮತ್ತು ಇತರ ಕಥೆಗಳು; ೬೯ ಶ್ರೀಕ್ಷೇತ್ರ ಉಡುಪಿ; ೭೦ ವಿನೋದ ವಿಹಾರ; ೭೧ ಭಾರತದ ಗತವೈಭವ; ೭೨ ಸತ್ಯ ಹರಿಶ್ಚಂದ್ರ; ೭೩ ಸೂಕ್ತಿಗಳು; ೭೪ ಉ.ಕ.ದ ಯಕ್ಷಗಾನ ಕಲಾವಿದರು; ೭೫ ದೇವರ ಸಾಮ್ರಾಜ್ಯದಲ್ಲಿ...; ೭೬ ಕ್ರಾಂತಿಕಂಠೀರವ ಭಗತ್‌ಸಿಂಘ್; ೭೭ ಜಾತಕಪಠನ ಮತ್ತು ಇತರ ಕಥೆಗಳು; ೭೮ ಅಮೃತವಾಣಿ; ೭೯ ಮಾಯಾಮೃಗ; ೮೦ ಡಾಕ್ಟರ್ ಗಾಂಧೀಜಿ; ೮೧* ಆದಿಶ್ರೀ ಶಂಕರಾಚಾರ್ಯರ ಜೀವನ ಚರಿತ್ರೆ; ೮೨ ಆದಿಶ್ರೀ ಶಂಕರಾಚಾರ್ಯ ವಿರಚಿತ ಸ್ತೋತ್ರಗಳು (ಅರ್ಥ ಸಹಿತ); ೮೩ ಬೆಡಗಿನ ನಾಡು ಕೊಡಗು; ೮೪ ಆಮೆಯ ಚಿಪ್ಪು ಮತ್ತು ಇತರ ಸತ್ಯಕಥೆಗಳು; ೮೫ ಮಂಗಳೂರಿಂದ ಮಧುರೆಗೆ; ೮೬ ಸತೀ ವೃಂದಾ; ೮೭ ಗೌತಮನ ಗೃಹತ್ಯಾಗ; ೮೮ ಗೃಹವೈದ್ಯ; ೮೯ ನಮ್ಮ ನಾಟಕಗಳು; ೯೦ ಜಾನಪದ ಕಥೆಗಳು; ೯೧ ಕೆಲವು ಉಪಯುಕ್ತ ಸಲಹೆಗಳು. ೯೨ ಅಭಿಜ್ಞಾನ ಶಾಕುಂತಲದಲ್ಲಿ ಲೋಕನೀತಿ. ೯೩ ಹೋಮಿಯೋಪಥಿ-ಚಿಕಿತ್ಸಾಸಾರ. ೯೪ ಯಕ್ಷಗಾನ ನಾಟಕದ ಪರಂಪರೆ; ೯೫ ಪುನರುಜ್ಜೀವನ (ಏಕಾಂಕ ನಾಟಕ); ೯೬ ಪ್ರಥಮ ಚಿಕಿತ್ಸೆಯ ಕೈಪಿಡಿ; ೯೭ ಹಸ್ತರೇಖಾ ವಿಜ್ಞಾನ; ೯೮ ಸ್ವಾತಂತ್ರ್ಯ; ೯೯ ಭಾರತೀಯ ಸ್ವಾತಂತ್ರ್ಯ ಸಂಗ್ರಾಮ; ೧೦೦ ಭಕ್ತ ಕುಚೇಲ; ೧೦೧ ಉತ್ತರನ ಪೌರುಷ; ೧೦೨ ಕುಮಾರ; ೧೦೩ ಕೇರಳ ಜ್ಯೋತಿಷ ೧೦೪ ಒಗಟುಗಳ ಗೊಂಚಲು. ೧೦೫ ಊರ-ಔಷಧಿಗಳು; ೧೦೬ ಮದ್ದು ಅವಾಂತರ;

*ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

# ಮದ್ವೆ ಅವಾಂತರ

## ಮೊದಲನೆ ದೃಶ್ಯ

(ಪುರೋಹಿತರು ಸಂಧ್ಯಾವಂದನೆ ಮಾಡುತ್ತಾ ಇದ್ದಾರೆ.)

ಗಣೇಶ ಶಾಸ್ತ್ರಿ: (ಆಚಮನ ಮಾಡುತ್ತಾ)....ಅಚ್ಯುತಾಯ ನಮಃ ಅನಂತಾಯ ನಮಃ....ಏನೇ, ಮಾಡುತ್ತಾ ಇದ್ದೀಯಾ ಲೇ ಗೌರಿ? ಕಾಫಿಗೆ ನೀರು ಇಟ್ಟಿದ್ದೀಯೋ ಇನ್ನೂ ಇಲ್ಲವೋ? ಆಗಲೇ ಆರೂವರೆ........ಮಧು ಸೂಧನಾಯ ನಮಃ....ತ್ರಿವಿಕ್ರಮಾಯ ನಮಃ....ಈಗೇನು ನೀರು ಕುದಿ ಯುತ್ತಾ ಇದೆ ಎಂದು ಕಾಣಿಸುತ್ತೆ, ಅಲ್ಲವೇನೇ? ಪದ್ಮನಾಭಾಯ ನಮಃ ....ದಾಮೋದರಾಯ ನಮಃ....ಏನೇ ಈಗೇನು ಕಾಫಿ ಪುಡಿ ನೀರೊಳಗೆ ಸುರಿಯುತ್ತಾ ಇದ್ದಿ ತಾನೇನೇ? ಪ್ರಾತಃ ಸಂಧ್ಯಾಂ ಕರಿಷ್ಯೇ....(ಸ್ವಲ್ಪ ಹೊತ್ತು ಮೂಗೊಳಗೆ ಗೊಣಗಿಕೊಂಡು) ಶ್ರೀ ಭಗವದಾಜ್ಞಾ ಭಗವತ್ಕಿಂಕರ ರೂಪಂ ಪ್ರಾತಃ ಸಂಧ್ಯಾ ಉಪಸ್ಥಾನಂ ಕರಿಷ್ಯೆ....ಸಂಧ್ಯಾಯೇ ನಮಃ.... ಸಾವಿತ್ರ್ಯೇ ನಮಃ.... ...ಈಗೇನೇ ಹಾಲು ಬೆರಸಿ ಸಕ್ಕರೆ ಪುಡಿ ಹಾಕುತ್ತಾ ಇದ್ದೀಯಾ ತಾನೇನೇ? ನನ್ನ ಸಂಧ್ಯಾವಂದನೆ ಕೂಡ ಮುಗಿಯಿತು. ಇನ್ನೂ ನಿನ್ನ ಕಾಫಿ ಆಗಲಿಲ್ಲವೇನೇ? ಮಾಡೋ ಕೆಲಸದಲ್ಲಿ ಶ್ರದ್ಧೆಯೇ ಇಲ್ಲ ಹೆಂಗಸರಿಗೆ! ಬೇಗ ತೆಗೊಂಡು ಬಾರೇ, ಡಿಕಾಕ್ಷನ್ ಆದರೂ ಪರವಾಗಿಲ್ಲ. ನೀನು ಕಾಫಿ ತರುವಷ್ಟರಲ್ಲಿ ಒಂದು ಮದುವೆ ಮಾಡಿ ಮುಗಿಸಿರಬಹುದು....

ಗೌರಿ: (ಕಾಫಿ ಲೋಟ ಹಿಡಿದು ಒಳಬಾಗಿಲಿಂದ ಪ್ರವೇಶ.) ಅಲ್ಲ ಅಂದ್ರೆ, ಕಾಫಿ ಮಾಡುವುದು, ನೀವು ಮಾಡುವ ಸಂಧ್ಯಾವಂದನೆ ಅಷ್ಟು ಸುಲಭ ಎಂದುಕೊಂಡಿದ್ದಿರೇನು? ಮೊದಲು ನೀರು ಕುದೀಬೇಕು; ಅದಕ್ಕೆ ಕಾಫಿ ಪುಡಿ ಹಾಕಬೇಕು; ಆಮೇಲೆ ಹಾಲು ಬೆರಸಬೇಕು. ಸಕ್ಕರೆ ಸೇರಿಸ ಬೇಕು. ನಿಮಗೇನು ಗೊತ್ತಾಗುತ್ತೆ ಎಂದರೆ....ನಿಮಗೆ ಹೇಳಿ ಏನು ಪ್ರಯೋ ಜನ....ಗಂಡಸಿಗೆ ಏಕೆ ಗೌರಿ ದುಃಖ!

ಗ. ಶಾಸ್ತ್ರಿ: ಗೌರಿಗೇನು ಗೊತ್ತಾಗುತ್ತದೆಯೋ ಗಣೇಶನ ದುಃಖ? ನಿನಗಂತೂ ಏನೂ ಗೊತ್ತಾಗೋಲ್ಲ ಬಿಡು ನನ್ನ ದುಃಖ. ಈಗಲೇ ಬಸ್ಸು ಬಂದುಬಿಟ್ಟಿರುತ್ತೆ. ನಾಲ್ಕೋ ಐದೋ, ಯಾರು ಬರುತ್ತಾರೆಯೋ ಏನು ಕಥೆಯೋ ವಿಶೇಷ ಸಂಭ್ರಮ ಅಂತ....ಬೇಗ ಹೋಗಬೇಕು ಅಲ್ಲಿಗೆ–ಇಲ್ಲದಿದ್ದರೆ ಆ ಪಂಚಾಪಕೇಶ ಶಾಸ್ತ್ರಿ ಬೇರೆ ಒಬ್ಬ ಹೊಸದಾಗಿ ಹುಟ್ಟಿಕೊಂಡು ಇದ್ದಾನಲ್ಲಾ, ಮೊನ್ನೆ ಮಾರ್ಚಿಯಿಂದ ನನ್ನ ಜತೆ ಕಾಂಪಿಟೇಷನ್ನಿಗೆ! ಬಂದವರನ್ನೆಲ್ಲಾ ತನ್ನ ಜೋಳಿಗೆಗೆ ತುಂಬಿಸಿಕೊಂಡು ನಾಮ ತೀಡಿ ಬಿಡುತ್ತಾನೆ ನನಗೆ. ಆದರೂನೂ ...ಎಲ್ಲಿ ಬೇಗ ಕಾಫಿ ಕೊಡು (ಕಾಫಿ ಬಟ್ಟಲು ಈಸಿಕೊಂಡು ಮೂರು ಗುಟುಕಿಗೆ ಕುಡಿದು ಬಟ್ಟಲು ವಾಪಸು ನೀಡುತ್ತಾ) ನೋಡೇ ಯಾರಾದರೂ ಬಂದು ಶಾಸ್ತ್ರಿಗಳು ಎಲ್ಲಿ ಅಂತ ಕೇಳಿದರೆ ಯಾರು, ಏಕೆ, ಏನು ಬೇಕಾಗಿತ್ತು ಅಂತ ಕೇಳಿ ತಿಳಿದುಕೋ. ಅಮಾವಾಸ್ಯೆ ದರ್ಭೆ; ಏಕಾದಶಿ ಯಾವತ್ತು ಅಂತ ಬರುತ್ತಾರಲ್ಲಾ—ಅವರಿಗೆಲ್ಲಾ ಶಾಸ್ತ್ರಿಗಳು ಊರಲ್ಲಿಲ್ಲ, ಹರಪನಹಳ್ಳಿಗೆ ಹೋಗಿದ್ದಾರೆ ಅಂತ ಹೇಳಿಬಿಡು. ಶ್ರಾದ್ಧ ಅಂತ ಬಂದರೂ ಸರಿಯೇ–ಮೊದಲು ಯಾರದು ಎಂದು ತಿಳಿದುಕೊಂಡೇ ಮುಂದಿನ ಮಾತು. ಮದುವೆ ಅಂದ್ರೆ ಯಾರ ಮನೆಯದಾದರೂ ಪರವಾಗಿಲ್ಲ. ಸ್ವಲ್ಪ ದುಬಾರಿಯಾಗೇ ಹೇಳು ಫೀಸು. ನಾವು ಕೇಳಿದಷ್ಟು ಕೊಟ್ಟೇ ಕೊಡುತ್ತಾರೆ. ಈ ಅರಮನೆಯವರು ನಮಗೆ ಪುರಸ್ಕಾರ ಕೊಡುವುದು ನಿಲ್ಲಿಸಿಬಿಟ್ಟಮೇಲೆ ನಾವು ಜನರಿಂದಲೇ ವಸೂಲುಮಾಡಬೇಕಾಗಿದೆ ಜಾತ ಬಾಕಿಯನ್ನೆಲ್ಲಾ.

ಗೌರಿ: ಬೆಳಗ್ಗೆ ಎದ್ದು ಪ್ರಾರಂಭಿಸಿಬಿಟ್ಟಿರಿ ನಿಮ್ಮ ಭಾಷಣಾನ. ನೀವು ನಿಮ್ಮ ವ್ಯವಹಾರ ಚಾತುರ್ಯವನ್ನು ಇಲ್ಲಿ ಹೊಗಳಿ ಹಾಡಿಕೊಂಡಿದ್ದರೆ ಅಲ್ಲಿ ಬಸ್ಸು ಬಂದು ಹೊರಟುಹೋಗುವ ಹೊತ್ತೂ ಆಗಿಹೋಗಿರುತ್ತೆ.

ಗ. ಶಾಸ್ತ್ರಿ: ಹೌದು ಕಣೆ....ಅಂದಹಾಗೆ ನಿನ್ನೆ ಟೂಫಾನ್ ಎಕ್ಸ್‌ಪ್ರೆಸ್ ಬಸ್ ಡ್ರೈವರು ಹೇಳಿದ್ದ: ಯಾರೋ ಅಯ್ಯನೋರು ಒಬ್ಬ ಫೀಮೇಲ್ ಪ್ಯಾಸೆಂಜರ್ ಜತೆ ಸೀಟ್ ಬುಕ್ ಮಾಡವ್ರೆ ಅಂತ. ಸ್ಟೇಟ್ ಎಕ್ಸ್‌ಪ್ರೆಸ್ ಇಬ್ರಾಹಿಂ ಕೂಡ ಹೇಳಿದ್ದ: ಯಾರೋ ಸಾಹೇಬರು ಹೋಲ್ ಪ್ಯಾಸೆಂಜರ್ ಜತೆ ಸೀಟ್ ರಿಸರ್ವ್ ಮಾಡಿಸವ್ರೆ ಅಂತ. ಇಷ್ಟು ಹೊತ್ತಿಗೆ ಎರಡೂ ಬಸ್ಸು ಬಂದುಬಿಟ್ಟಿರುತ್ತೆ. ಈಗಲೇ ಏಳು ಗಂಟೆ ಆಗುತ್ತಾ ಬಂತು. ಬರು

ತ್ತೀನೆಯೋ ನಾನು. ಉಷಾರು ಮನೆ ಕಡೆ. ಅಮಾವಾಸ್ಯೆಗೆ ಬಿಟ್ಟೆ ದರ್ಬೆ; ಏಕಾದಶಿಗೆ ನುಚ್ಚು ಕೇಳಿದವರಿಗೆ ಬಾಗಿಲು ತೆಗೆಯಲೇಬೇಡ, ತಿಳಿಯಿತೇನೇ ಬರ್ತೀನ್ಯೇ ನಾನು. (ಗಣೇಶ ಶಾಸ್ತ್ರಿ ನಿಷ್ಕ್ರಮಣ.)

ಗೌರಿ: ನಮ್ಮ ಅಪ್ಪ, ಕ್ಯಾತಸಂದ್ರದ ಕೊಂಗ್ರೆಸ್ ಲೀಡರ್ ಕೇಶವಯ್ಯ ಏನೋ ಅಂತಿದ್ದರೆ ಇವರು ಅವರಿಗಿಂತ ಒಂದು ಕೈ ಮೇಲು. ಏನು ಚಾಣಾಕ್ಷತನ. ಅಲ್ಲ, ಎಲ್ಲ ಶಾಸ್ತ್ರಿಗಳೂ ಇವರ ಹಾಗೆಯೇ ಆಗುತ್ತಾ ಇದ್ದಾರಲ್ಲಾ, ಅದೇ ಅಲ್ಲವೇ ಆಶ್ಚರ್ಯ!

(ತೆರೆ.)

## ಎರಡನೆ ದೃಶ್ಯ

(ಗೋಧಿಶಿವಮ್ಮನ ಹಳ್ಳಿ ರಸ್ತೆ. ಪ್ರವೇಶ ಎಡಗಡೆಯಿಂದ: ಸತ್ಯನಾರಾಯಣ ರಾಯರು ಮತ್ತು ಅವರ ಪುತ್ರ.)

ಸ. ನಾ. ರಾಯರು: ಗೋಧಿಶಿವಮ್ಮನ ಹಳ್ಳಿಗೇನೋ ಬಂದದ್ದಾಯ್ತು. ಬಸ್ಸಲ್ಲಿ ಆ ಭಾಗವತರೇ ಹೇಳಿದ್ದರಲ್ಲ....ಯಾರೋ ಇಬ್ಬರು ರಾಯರು ಅಂತ ಇದ್ದಾರೆ- ಈ ಊರಲ್ಲಿ. ಒಬ್ಬರಿಗೆ ಹೆಣ್ಣು ಬೇಕು; ಇನ್ನೊಬ್ಬರಿಗೆ ಗಂಡು ಬೇಕು ಅಂತ. (ಅವರ ಹಿಂದೆ ಇರುವ ಮಗನನ್ನು ಉದ್ದೇಶಿಸಿ) ಯಾರಪ್ಪ ಅದು ರಾಮಚಂದ್ರ....

ರಾಮಚಂದ್ರ: ತಿರುಮಲರಾಯರು ಅಂತಲೇ.

ಸ. ನಾ. ರಾಯರು: ನೋಡಿದೆಯಾ....ಅವನೇ....ಅವನೇ....ಅವನಿಗೆ ಆರು ಜನ ಗಂಡುಮಕ್ಕಳು. ಇನ್ನು ಯಾರೋ ಇನ್ನೊಬ್ಬರ ಹೆಸರು ಹೇಳಿದರಲ್ಲೋ ಆ ಭಾಗವತರು....ಆರು ಜನ ಹೆಣ್ಣುಮಕ್ಕಳು ಅಂತ.... ನೀನು ಹೇಳಪ್ಪ ರಾಮಚಂದ್ರ....

ರಾಮಚಂದ್ರ: ಮಹಾಬಲರಾಯರು ಅಂತ.

ಸ. ನಾ. ರಾಯರು: ಹು....ಹು....ಮಹಾಬಲರಾಯರು ಅಂತ.... ಎಲ್ಲಿದೆಯೋ ಏನು ಕಥೆಯೋ ಅವರ ಮನೆ....ಮನೆ ತಪ್ಪಿ ತಿರುಮಲರಾಯರ ಮನೆಗೇನಾದರೂ ನಾವು ಹೋದೆವೋ ಸಾಯುವ ವರೆಗೆ ನೀನು ಬ್ರಹ್ಮಚಾರಿಯಾಗಿರಬೇಕಾಗುತ್ತೋ!

ರಾಮಚಂದ್ರ: ಈ ಊರವರು ಯಾರಾದರೂ ಸಿಕ್ಕಿದ್ದರೆ ತುಂಬ ಉಪಕಾರ ಆಗುತ್ತಿತ್ತು.

(ಬಲಭಾಗದಿಂದ ಗಣೇಶ ಶಾಸ್ತ್ರಿಗಳ ಪ್ರವೇಶ.)

ಗಣೇಶ ಶಾಸ್ತ್ರಿ: (ಸತ್ಯನಾರಾಯಣರಾಯರು ಮತ್ತು ಅವರ ಮಗ ನನ್ನು ನೋಡಿ ಚಕಿತರಾಗಿ) ಆಗಲೇ ಬಸ್ಸು ಬಂದುಬಿಟ್ಟಿತು ಎಂದು ಕಾಣಿ ಸುತ್ತೆ... ಸದ್ಯ ಪಂಚಾಪಕೇಶ ಶಾಸ್ತ್ರಿ ಇವರಿಗೆ ಇನ್ನೂ ಗಂಟುಬಿದ್ದಿಲ್ಲ.... ಒಳ್ಳೇದೆ ಆಯಿತು.)

ಸ. ನಾ. ರಾಯರು: ನಮಸ್ಕಾರ, ನಮಸ್ಕಾರ ವೇದಾಚಾರ್ಯರೇ. ನಾನು—ಸತ್ಯನಾರಾಯಣರಾಯರು ಅಂತ ನನ್ನ ಹೆಸರು.

ಗ. ಶಾಸ್ತ್ರಿ: ಸಂತೋಷ, ಸಂತೋಷ. ಏನು, ಶ್ರಾದ್ಧ ಸಂಕಲ್ಪ ಏನಾದರೂ ಇತ್ತೇನು? ಇಷ್ಟು ದೂರ ದಯಮಾಡಿಸಿದರಲ್ಲಾ.... ಕ್ಷಮಿಸಿ.... ನಾನು ಬಂದವರನ್ನೆಲ್ಲಾ ಹಾಗೆ ಕೇಳೋದು ವಾಡಿಕೆ....ಗಯೆಗೆ ಹೋಗಿ ಸ್ವಂತ ಶ್ರಾದ್ಧ ಮಾಡಿಕೊಳ್ಳಲು ಚೈತನ್ಯ ಇಲ್ಲದವರೆಲ್ಲಾ ಗೋಧಿತಿಮ್ಮನ ಹಳ್ಳಿಗೆ ಬಂದು ಸ್ವಂತ ಮತ್ತು ಇತರರ ಕೈಂಕರ್ಯ ನೆರವೇರಿಸುತ್ತಾರೆ ಅಂತ ಈ ಊರಿನ ಸ್ಥಳಮಹಾತ್ಮ್ಯೆ.

ಸ. ನಾ. ರಾಯರು: ಇಲ್ಲ ದೇವರು.... ನೋಡಿ, ಇವನೇ ನನ್ನ ಆರು ಜನ ಗಂಡು ಮಕ್ಕಳಲ್ಲಿ ಕೊನೆಯವ—ರಾಮಚಂದ್ರ, ನನ್ನ ಮೂರನೆ ಹೆಂಡತಿ ಮಗ.

ಗ. ಶಾಸ್ತ್ರಿ: ಮೂರನೆ ಹೆಂಡತಿ? ಮೂರು ಹೆಂಡಿರೇ ನಿಮಗೆ?

ಸ. ನಾ. ರಾಯರು: ಒಟ್ಟಿನಲ್ಲಿ ಸ್ವಾಮಿ; ಒಬ್ಬರಾದ ಮೇಲೆ ಒಬ್ಬರು. ಒಬ್ಬೊಬ್ಬರೂ ನನಗೆ ಪ್ರೀತಿಯ ರಾಣಿಯರಾಗಿ ಎರಡೆರಡು ಗಂಡುಮಕ್ಕಳನ್ನು ದಯಪಾಲಿಸಿದರು. ಎಲ್ಲರೂ ಪಾಪ, ತಮ್ಮ ಮಕ್ಕಳಿಗೆ ಬೇಗ ಮದುವೆಮಾಡಿಬಿಡಿ ಎಂದು ಹೇಳಿಕೊಂಡೇ ಸತ್ತರು. ಕೊನೆಯವ ಳಂತೂ—ಎಂಥ ಗುಣ ಸ್ವಾಮಿ ಅವಳದ್ದು. ಎಲ್ಲರಿಗೂ ಮದುವೆಮಾಡಿದ ಮೇಲೆ ಆ ಸೊಸೆಯರನ್ನು ನೋಡಿಕೊಳ್ಳುವುದಕ್ಕಾಗಿಯಾದರೂ ಇನ್ನೊಬ್ಬ ಳನ್ನು ಮದುವೆಯಾಗಿ ಎಂದು ಹೇಳಿ ಕಣ್ಣುಮುಚ್ಚಿದಳು ಸ್ವಾಮಿ. ಇವರಿ ಗೆಲ್ಲಾ ಮದುವೆಮಾಡಿ, ನಾಲ್ಕನೆ ಮದುವೆ, ಮೂರನೆ ಹೆಂಡತಿಗೆ ಸಾಯುವು

ದಕ್ಕೆ ಮುಂಚೆ ಆಶ್ವಾಸನ ಕೊಟ್ಟಂತೆ ಮಾಡಿಕೊಂಡು, ಅವಳು ಕಣ್ಣು ಮುಚ್ಚುವ ತನಕ ಸಂಸಾರ ಮಾಡಿ ಆ ಮೇಲೆ ಸನ್ಯಾಸಿ ಆಗೋಣ ಅಂತ ಬಯಕೆ.

ಗ. ಶಾಸ್ತ್ರಿ: ಒಳ್ಳೇದೇ. ಮದುವೆ ಎಂಥಿರಲ್ಲ, ನನ್ನಿಂದ ಸಾಧ್ಯವಾದಷ್ಟು ಸಹಾಯಮಾಡಲು ನಾನು ಸಿದ್ಧ.

ಸ. ನಾ. ರಾಯರು: ತಮ್ಮ ನಾಮಧೇಯ?

ಗ. ಶಾಸ್ತ್ರಿ: ನನ್ನ ಹೆಸರು ಕಟ್ಟಿಕೊಂಡೇನು? ಆದರೂ ನೀವು ಕೇಳಿದಿರಲ್ಲ ಅಂತ ಹೇಳುತ್ತೇನೆ—ಗಣೇಶ ಶಾಸ್ತ್ರಿ ಅಂತ.

ಸ. ನಾ. ರಾಯರು: ಸರಿ. ತಮ್ಮಿಂದ ಒಂದು ಉಪಕಾರ ಆಗಬೇಕು ಶಾಸ್ತ್ರಿಗಳೇ. ಮಹಾಬಲರಾಯರ ಮನೆ ಎಲ್ಲಿ ಅಂತ ತಿಳಿಸಿದರೆ....

ಗಣೇಶ ಶಾಸ್ತ್ರಿಗಳು: ಅಯ್ಯೋ ನಿಮ್ಮಂಥವರ ಸೇವೆ ಮಾಡೋಣ ಅಂತಲೇ ನಾನು ಇರೋದು ನೋಡಿ....ನೆಟ್ಟಗೆ ಹೋಗಿ ಹೀಗೇನೇ ಸೊಟ್ಟಗೆ ತಿರುಗಲೇ ಬೇಡಿ....ಏಕೆಂದರೆ ನಮ್ಮೂರಿನ ರಸ್ತೆಗಳಿರುವುದೇ ಹಾಗೆ. ಬಲಕ್ಕೆ ಮೂರು ರಸ್ತೆ ಹೋಗುತ್ತೆ. ಎಡಕ್ಕೆ ಮೂರು ರಸ್ತೆ ಹೋಗುತ್ತೆ. ಎಲ್ಲ ಒಂದೇ ಸಾಲಾಗಿ....ನೀವು ಮಹಾಬಲ ರಾಯರ ಮನೆಗೆ ಹೋಗಬೇಕಾದರೆ ಎಡಕ್ಕೆ ಹೋಗಬೇಕು. ಮಧ್ಯದ ರಸ್ತೆಯಲ್ಲಿ, ರಸ್ತೆ ಕೊನೆಯಿಂದ ಮೂರನೆ ಮನೇನೇ ಮಹಾಬಲರಾಯರದು.

ಸ. ನಾ. ರಾಯರು: ತುಂಬ ಉಪಕಾರವಾಯಿತು ಶಾಸ್ತ್ರಿಗಳೇ. ನಮ್ಮ ಹುಡುಗನಿಗೆ ಆಶೀರ್ವಾದ ಮಾಡಬೇಕು. ನಿಮ್ಮ ಆಶೀರ್ವಾದ ಬಲದಿಂದ ಲಾದರೂ ಈ ನೆಂಟಸ್ತಿಕೆ ಕುದುರಿದರೆ ಆರು ಜನಕ್ಕೂ ಮದುವೆ ಆಯಿತು ಎಂತ ಎನ್ನಿಸಿ.....ಹೇಳಿದೆನಲ್ಲಾ ಆಗಲೇ ನನ್ನ ಅಭಿಲಾಷೇನ....ಲೋ ರಾಮ ಚಂದ್ರ ಶಾಸ್ತ್ರಿಗಳಿಗೆ ನಮಸ್ಕಾರ ಮಾಡೋ!

ಗ. ಶಾಸ್ತ್ರಿ: ಶುಭಸ್ಯ ಶೀಘ್ರಂ....ಇನ್ನು ನೀವು ಹೊರಡಬಹುದಲ್ಲ. ಏನಾದರೂ ಹೆಚ್ಚು ಕಡಮೆಯಾದರೆ ಗೋಧಿತಿಮ್ಮನ ಹಳ್ಳಿಯಲ್ಲಿ ಮೂರು ಸಲ ಹುಡುಕಿದರೆ ಎಲ್ಲಿಯಾದರೂ ಸಿಕ್ಕಿಯೇ ಸಿಗುತ್ತೇನೆ. ಹೋಗಿ ಬನ್ನಿ.

(ನಾರಾಯಣರಾಯರು ಮತ್ತು ಅವರ ಮಗನ ನಿಷ್ಕ್ರಮಣ.)

ಇಬ್ರಾಹಿಂ ಹೇಳಿದ ಸ್ಪೇಟ್ ಎಕ್ಸ್‌ಪ್ರೆಸ್ಸಿನವರು ಬಂದಹಾಗೆ ಆಯಿತು,

ತುಫಾನ್ ಎಕ್ಸ್‌ಪ್ರೆಸ್ಸಿನಿಂದ ಬಂದವರು ಎಲ್ಲಿ ಕಾಣಿಸಲೇ ಇಲ್ಲವಲ್ಲ. ಅವರೂ ಈ ಕಡೆಯಿಂದ ಎಲ್ಲಾದರೂ ಬರುತ್ತಾ ಇದ್ದಾರೋ ಏನೋ....

(ಎಡಬಾಗಿಲ ಕಡೆ ಕಾಲು ಹಾಕುವನು. ಅದೇ ಹೊತ್ತಿಗೆ ಬದರಿ ನಾರಾಯಣರಾಯರು. ಮತ್ತು ಸುಟ್ಟ ಬದನೆಯಂತಿರುವ ಅವರ ಮಗಳ ಪ್ರವೇಶ.)

ಬದರಿ ನಾರಾಯಣರಾಯರು: ಸ್ವಾಮಿ ಶಾಸ್ತ್ರಿಗಳೇ, ವಂದೇ ಗುರು ಚರಣಂ.

ಗ. ಶಾಸ್ತ್ರಿ: (ಹಿಂದಿರುಗಿ ನೋಡಿ, ಬೆಚ್ಚಿಬಿದ್ದು, ಚೇತರಿಸಿಕೊಂಡು ರಂಗದ ಮಧ್ಯಕ್ಕೆ ಬರುತ್ತಾ.) ನಮಸ್ಕಾರ ರಾಯರಿಗೆ. ಆಗಲೇ ತುಫಾನ್ ಎಕ್ಸ್‌ಪ್ರೆಸ್ ಬಂದುಬಿಟ್ಟಿತೇನು? ತುಫಾನ್ ಎಕ್ಸ್‌ಪ್ರೆಸ್ಸಿಗೆ ಯಾವಾಗಲೂ ಏನಾದರೂ ಕಾಯಿಲೆ ಇದ್ದೇ ಇರುತ್ತೆ. ಟೈರು ಫೈರೋ, ಬಾಡಿ ಬಿಟ್ಟುಕೊಂಡೋ, ಗ್ಯಾಸು ಗೂಸಾಗೋ........

ಬ. ನಾ. ರಾಯರು: ಅಂತದೇನೂ ಆಗಲಿಲ್ಲ ಇವತ್ತು. ಇಬ್ರಾಹಿಂ ನನಗೆ ಹೇಳಿದ ಬಸ್ಸು ಹತ್ತುವಾಗಲೇ, "ಗೋಧಿ ತಿಮ್ಮನ ಹಳ್ಳಿ ತುಂಬ ಶಾಸ್ತ್ರಿಗಳು. ಗಣೇಶ ಶಾಸ್ತ್ರಿಗಳನ್ನೇ ಹುಡುಕಿ. ಅವರು ತುಂಬ ಆಸೇಸವಾಗಿ ಜ್ಞಾನ ಸಂಪಾದಿಸವ್ರೆ" ಅಂತ. ಗಣೇಶ ಶಾಸ್ತ್ರಿಗಳು ನನಗೆ ಗೊತ್ತು ನೀವೇ ಅಂತ! ಆದರೆ, ನೀವೇ ಅಂತ ಖಂಡಿತಮಾಡಿಕೊಳ್ಳೋಕೆ ಕೇಳುತ್ತಾ ಇದ್ದೇನೆ ಅಷ್ಟೆ.

. ಗ. ಶಾಸ್ತ್ರಿ: ನಾನೇನೇ ಗಣೇಶ ಶಾಸ್ತ್ರಿ. ಎಲ್ಲಿಗೆ ತಮ್ಮ ಪ್ರಯಾಣ? ಇವರೆಲ್ಲಾ ನಿಮ್ಮ ಕುಮಾರ್ತಿಯರೇನು? ಇಲ್ಲೇನು, ಯಾವುದಾದರೂ ಮದುವೆಗೆ ಬಂದಿದ್ದರೇನು? ಅವರ ಯಜಮಾನರಿಗೆ ಎಲ್ಲಿ ಕೆಲಸ?

ಬ. ನಾ. ರಾಯರು: ಯಾರಿಗೆ ಸ್ವಾಮಿ ಮದುವೆ? ಇವಳಿಗೆ ಮದುವೆ ಮಾಡಬೇಕು ಅಂತ ನಾನೆ ಇವಳನ್ನ ಕರೆದುಕೊಂಡು ಬಂದಿರುವುದು ಗೋಧಿ ತಿಮ್ಮನ ಹಳ್ಳಿಗೆ. ಇನ್ನೂ ಲಗ್ನ ಕೂಡಿಬಂದಿಲ್ಲ. ಮೈಸೂರು ಮೈಸೂರನ್ನೇ ಸುತ್ತಿದ್ದು ಆಯಿತು. ಸೇರುಗಟ್ಟಲೆ ಮೈಸೂರು ಪಾಕ್ ತಿನ್ನಿಸಿದ್ದಾಯಿತು. ಕೊನೆಗೆ ಮದುವೆ ಮಾಡಬೇಕೆಂದಿರುವವರಿಗೆ ಕಲ್ಪವೃಕ್ಷ ಗೋಧಿತಿಮ್ಮನ ಹಳ್ಳಿ ಅಂತ ಯಾರೋ ಹೇಳಿದ್ದು ಕೇಳಿ ಇಲ್ಲಿ ಬಂದೆ. ತಿರುಮಲರಾಜುರ ಮನೆಯೆಲ್ಲಿ ಸ್ವಾಮಿ? ಅವರಿಗೆ ಆರು ಜನ ಗಂಡಂತೆ; ಐವರು ಗಂಡುಗಳಿಗೆ ಗೂಡು ಸಿಕ್ಕಿದೆಯಂತೆ. ಜಾಗಟೆ ದಾಸಯ್ಯ ಹೇಳಿದ

ಈ ಊರ ಬಾಗಿಲಲ್ಲಿ, ನಾವು ಒಳಗೆ ಬರುತ್ತಿದ್ದಾಗ. ಅಲ್ಲವೇನೇ ಸರಸು? ಅವರ ಮನೆ ತೋರಿಸಿದರೆ........

ಗ. ಶಾಸ್ತ್ರಿ: (ನಗು ನುಂಗಿ) ಯಾರು ತಿರುಮಲರಾಯರೇ? ಅವರ ಮನೆ ಕೇಳಿದಿರಾ? ನೋಡಿ ನೆಟ್ಟಗೆ ಹೋಗಿ ಹೀಗೇನೇ....ಸೊಟ್ಟಗೆ ನೋಡಬೇಡಿ. ಏಕೆಂದರೆ ನಮ್ಮೂರಲ್ಲಿರುವ ರಸ್ತೆಗಳೆಲ್ಲಾ ಹಾಗೇನೇ. ಬಲಕ್ಕೆ ಮೂರು ರಸ್ತೆ ಹೋಗುತ್ತೆ; ಎಡಕ್ಕೆ ಮೂರು ರಸ್ತೆ ಹೋಗುತ್ತೆ. ಎಲ್ಲ ಒಟ್ಟಿಗೆ ಒಂದೇ ಲೈನ್‌ನಲ್ಲಿ. ನೀವು ಎಡಕ್ಕೆ ಹೋಗಬೇಡಿ; ಹೋದರೆ ಮಹಾಬಲರಾಯರ ಮನೆ ಸಿಗುತ್ತದೆ. ಆ ಮೇಲೆ ಆಭಾಸವಾದೀತು. ಬಲಕ್ಕೆ ಹೋಗಿ ಮಧ್ಯದ ರಸ್ತೆಯಲ್ಲಿ ಉದ್ದಕ್ಕೆ ಹೋದರೆ ರಸ್ತೆ ಕೊನೆಯಲ್ಲಿ ಈ ಕಡೆಯಿಂದ ಮೂರನೆ ಮನೇನೇ ತಿರುಮಲರಾಯರದು. ಕ್ಷಮಿಸಿ. ನಾನೂ ತಿರುಮಲರಾಯರೂ ಗಳಸ್ಯ ಕಂಠಸ್ಯ; ಕದೇವ ಏಕವಚನಂ.

ಬ. ನಾ. ರಾಯರು: ತುಂಬ ಉಪಕಾರವಾಯಿತು ಸ್ವಾಮಿ. ನಿಮ್ಮ ಬಾಯಲ್ಲಿ ಮೊದಲು ಬಂದಂತೆ ಇವಳಿಗೆ ಸರಿಯಾದ ಪತಿ ಸಿಕ್ಕರೆ ತೃಪ್ತೋಸ್ಮಿ. ಸರಸೂ, ನಮಸ್ಕಾರ ಮಾಡಮ್ಮ ದೊಡ್ಡವರಿಗೆ. ಬಂದ ಕಾರ್ಯ ಫಲಿಸಿ, ನಿನಗೊಬ್ಬ ಗಂಡ ಸಿಕ್ಕರೆ ನಾನು ನಿಶ್ಚಿಂತೆಯಿಂದ ಬೊಂಬಾಯಿಗೆ ಹೋಗಿ ಸಿನಿಮಾ ಸೇರಿಕೊಂಡು ಬಿಡುತ್ತೇನೆ!

ಗ. ಶಾಸ್ತ್ರಿ: ಶುಭಂ, ಮಂಗಳಂ (ಎಂದು ಕಾಲಿಗಿಂತ ಸ್ವಲ್ಪ ದೂರ ಎರಗಿರುವ ಸರಸುವನ್ನು ಕೈ ಹಿಡಿದು ಎಬ್ಬಿಸಿ ನಿಲ್ಲಿಸುವರು. ಬದರಿ ನಾರಾಯಣರಾಯರು ಮತ್ತು ಮಗಳ ನಿಷ್ಕ್ರಮಣ.) (ಜೋರಾಗಿ ನಗುತ್ತಾ) ಇವತ್ತು ಒಳ್ಳೆ ಕಾಸಿಲ್ಲದ ತಮಾಷೆ ನನಗೆ. ತಕ್ಕ ಹಾಗೆ ಕಮೀಷನ್ನೂ ಕೈಗೆ ಬೀಳುತ್ತೆ. ಅಲ್ಲ, ಸತ್ಯನಾರಾಯಣರಾಯ ತನ್ನ ಮಗನ್ನ ಕರೆದುಕೊಂಡು ಮಹಾಬಲರಾಯನ ಮನೆಗೆ ಹೋಗಿದ್ದಾನೆ, ಆ ರಾಯನಿಗೂ ಇವನ ಹಾಗೆಯೇ ಐದು ಮತ್ತೊಂದು ಗಂಡು ಮಕ್ಕಳು ಎಂದು ಗೊತ್ತಿಲ್ಲದೆ; ಇನ್ನು ಇವನು ಈ ಬದರೀ ನಾರಾಯಣ ತನ್ನ ಹೆಣ್ಣು ಮಗಳನ್ನು ಕಟ್ಟಿಕೊಂಡು ತಿರುಮಲರಾಯನ ಮನೆ ತೂರಲು ಹೊರಟಿದ್ದಾನೆ. ಇವತ್ತು ಅನಾಹುತ ಆಗೋದಂತೂ ಖಂಡಿತ. ನಡೆಯೋದೆಲ್ಲಾ ನಡೆಯಲಿ! ಊರ ಅಶ್ವತ್ಥಕಟ್ಟೆ ಹತ್ತಿರ ಹೋಗಿರೋಣ ಅಲ್ಲಿ ವರೆಗೆ. ವೆಂಕಟೇಶ ಶ್ರೇಷ್ಠಿ

ನಾಗರ ಪ್ರತಿಷ್ಠೆ ಮಾಡಿಸುತ್ತಾನಂತೆ. ನಾಲ್ಕಾಣೆ ಆರಾಣೆ ಸಿಕ್ಕಿದಷ್ಟು ದಕ್ಷಿಣೆ ಗಿಟ್ಟಿಸೋಣ. (ಗ. ಶಾಸ್ತ್ರಿ ತೆರೆಯಿಂದ ಮರೆ.)

(ತೆರೆ.)

## ಮೂರನೆ ದೃಶ್ಯ

[ಸುಸಜ್ಜಿತವಾದ ಮಹಾಬಲರಾಯನ ಕೋಣೆ.]

(ಕುರ್ಚಿ ಒಂದರಲ್ಲಿ ಮಹಾಬಲರಾಯರು ಕುಳಿತು ಮಾಸಿಕ ಒಂದನ್ನು ಓದುತ್ತಿರುವರು. ಹೊರಗಿನಿಂದ "ಮಹಾಬಲರಾಯರು ಇದ್ದಾರಾ" ಎಂಬ ಧ್ವನಿ ಕೇಳಿಬರುವುದು.)

ಮ. ಬ. ರಾಯರು: (ಕುರ್ಚಿಯಿಂದ ಎದ್ದು.) ಯಾರಪ್ಪ ಅದು.... ಬೆಳಗ್ಗೆ ಎದ್ದು (ಬಾಗಿಲ ವರೆಗೆ ಹೋಗಿ ಚಿಲಕ ತೆಗೆದಂತೆ ಮಾಡಿ.) ಬನ್ನಿ ಬನ್ನಿ ಒಳಗೆ. (ಸ. ನಾ. ರಾಯರು ಮತ್ತು ಮಗನ ಪ್ರವೇಶ.) ಇವರೆಲ್ಲಾ ಏನು ನಿಮ್ಮ ಸ್ನೇಹಿತರೇನು? ಇವರು ಯಾರು ನಿಮ್ಮ ಸ್ನೇಹಿತರು? ಬನ್ನಿ ಕುಳಿತುಕೊಳ್ಳಿ. (ಒಬ್ಬೊಬ್ಬರಿಗೆ ಒಂದೊಂದು ಕುರ್ಚಿ ನಿರ್ದೇಶಿಸಿ, ತಾನು ಮೊದಲು ಕೂತಿದ್ದ ಕುರ್ಚಿಯಲ್ಲಿ ಕುಳಿತು.) ಏನು ಬಂದಿರಲ್ಲಾ, ಏನು ನಮ್ಮ ಕಂಪೆನಿಯಲ್ಲಿ ಇನ್ಶ್ಯೂರ್ ಮಾಡಲು ಬಂದಿದ್ದೀರೇನು? ನಾನೇ ಬ್ರಾಂಚ್ ಮ್ಯಾನೇಜರು ಈ ಊರಿಗೆ! ಹ್ಹ ಹ್ಹ ಹ್ಹ.

ಸ. ನಾ. ರಾಯರು: ನಾನು........

ಮ. ರಾಯರು: ನನಗೊತ್ತು....ಇಲ್ಲ. ಇಲ್ಲಿ ಎಲ್ಲಾದರೂ ಸೈಟು ಕೊಳ್ಳಲು ಬಂದಿದ್ದೀರಿ ತಾನೆ? ನಾನೇ ಈ ಊರಿಗೆ "ಹೌಸ್ ಬಿಲ್ಡಿಂಗ್ ಕೋಆಪರೇಟಿವ್ ಸೊಸೈಟಿ" ಕಟ್ಟಿಸಿದವನು.

ಸ. ನಾ. ರಾಯರು: ನಾನು ಇಲ್ಲಿ ಬಂದುದು.....

ಮ. ಬ. ರಾಯರು: ಸರಿ ಸರಿ ಗೊತ್ತಾಯ್ತು. ಸೈಟಿಗಲ್ಲದಿದ್ದರೆ ಇನ್ಶ್ಯೂರೆನ್ಸ್‌ಗೇನೇ ನೀವು ಬಂದಿರೋದು. ಮಹಾಬಲರಾಯರ ಮನೆಗೆ ಮಹಾಜನಗಳು ಎರಡೇ ಕೆಲಸದ ಮೇಲೆ ಬರೋದು ಇಲ್ಲ ಸೈಟ್ ಕೊಂಡುಕೊಳ್ಳೋಕೆ; ಇಲ್ಲ ಇನ್ಶ್ಯೂರ್ ಮಾಡೋಕೆ. ಯಾರು ಇವರು ನಿಮ್ಮ ಸ್ನೇಹಿತರು? ಎಲ್ಲಿ ಕೆಲಸ? ನಮ್ಮ F. I. I. C. ಅದೇ ಫ್ರೀ

ಇಂಡಿಯಾ ಇನ್ಶ್ಯೂರೆನ್ಸ್ ಕಂಪೆನಿ ಇತರೇ ಇನ್ಶ್ಯೂರೆನ್ಸ್ ಕಂಪೆನಿಗಳಂತಲ್ಲ. ಲೋ ರಾಮು, ಆ ಇನ್ಶ್ಯೂರೆನ್ಸ್ ಪಾಲಿಸಿಗಳನ್ನು ತೆಗೆದುಕೊಂಡು ಬಾರೋ (ರಾಮು ಒಳಗಿಂದ ಬಂದು ಮ. ಬ. ರಾಯರ ಕೈಗೆ ಒಂದು ಫೈಲು ಕೊಟ್ಟು ನಿಷ್ಕ್ರಮಣ.) ನೋಡಿ ನಿನ್ನೆ ಚಿಟ್ಟಿನಾಡು ಮೊದಲಿಯಾರು ಎರಡು ಸಾವಿರಕ್ಕೆ ಇನ್ಶ್ಯೂರ್ ಮಾಡುತ್ತೇನೆ ಎಂದು ಕಾಗದ ಬರೆದರು. ಮೂರು ವರ್ಷದ ಹಿಂದೆ ಅವರಿಗೆ ಮೊದಲನೆ ಪ್ರೀಮಿಯಂ ಬೇಗ ಕಳುಹಿಸಿ ಎಂದು ನಾವು ಬರೆದ ಕಾಗದಗಳ ಕಂತೆ ಈ ಫೈಲು. ಲೋ, ರಾಮು [redacted] ಹಸಿರು ಫೈಲು ತೆಗೊಂಡು ಬಾರೋ. (ರಾಮು ಫೈಲು ಕೊಟ್ಟು ನಿಷ್ಕ್ರಮಣ.) ನೋಡಿ ಇದು ಅಭಾವನಗರದ ರಾಜಮಹಾರಾಜರ ಸುಕುಮಾರರ ಫೈಲು—ಸಾವಿರ ರೂಪಾಯಿಗೆ. ಅವರು ಆಗಲೆ ಮೊದಲ ಪ್ರೀಮಿಯಂನ ಮುಕ್ಕಾಲು ಭಾಗ ಕೊಟ್ಟುಬಿಟ್ಟಿದ್ದಾರೆ. ತುಂಬ ಗುಣಶಾಲಿ. ಅರಮನೆ ಇದ್ದರೂ ನೆರೆಮನೆ ವಿಳಾಸವೇ ಅವರು ಕೊಡೋದು. ಲೋ ರಾಮು, [redacted] ನೀಲಿ ಹಳದಿ ಫೈಲು ತೆಗೆದುಕೊಂಡು ಬಾರೋ (ಫೈಲು ತಂದುಕೊಟ್ಟು ರಾಮು ನಿಷ್ಕ್ರಮಣ.) ನೋಡಿ, ನಾನು ನಮ್ಮ ಒಬ್ಬ ಮಗನಿಗೇ ಎಲ್ಲ ಕೆಲಸಗಳನ್ನೂ ಹೇಳೋಲ್ಲ. ಬೆಳಗಿಂದ ಸಂಜೆ ವರೆಗೆ ಯಾವ ಕೆಲಸ ಆಗಬೇಕಾದರೂ ನಾನು ಅವರನ್ನು ಸೀನಿಯಾರಿಟಿ ಪ್ರಕಾರವೇ ಕರೆಯೋದು. ನೋಡಿ, ಈ ಹಳದಿ ಫೈಲು ಮೊನ್ನೆ ಕುದುರೆ ರೇಸಲ್ಲಿ ಫಸ್ಟ್ ಬಂತಲ್ಲ—"ರಂಗೂನ್ ರೌಡಿ" ಕುದುರೆ—ಅದರ ಮಾಲೀಕನದು. [redacted] ಕುದುರೆ ಕುಂಟು ಎನ್ನಿ. ಅದಕ್ಕೆ ಅದರ ಮಾಲೀಕ ಚಿನ್ನಪ್ಪ ಅವರು [redacted] ಕುಂಟು ಕುದುರೆಯನ್ನು ಮೂರು ಸಾವಿರಕ್ಕೆ ಇನ್ಶ್ಯೂರ್ ಮಾಡಿದ್ದಾರೆ ನಮ್ಮ ಕಂಪೆನಿಯಲ್ಲಿ (ಸ. ನಾ. ರಾಯರ ಕಿವಿ ಸಮೀಪಿಸಿ) ಮೂರು ಸಾವಿರ ಸ್ವಾಮಿ. ಈ ನೀಲಿಪೆಟ್ಟಿಗೆ ತುಂಬ ನಾನು ಅವರಿಗೆ ಬರೆದ ಕಾಗದ; ಅವರು ನನಗೆ ಬರೆದ ಕಾಗದಗಳ ಕಂತೆ ಇವೆ ಎನ್ನಿ. ಇನ್ನೂ ಆರೇಳು ಜನ ಇನ್ಶೂರ್ ಮಾಡಿದ್ದಾರೆ. ಮೊನ್ನೆ ತಾನೆ ಮೂರು ಮಂದಿ ಫಾರಂ ಈಸಿಕೊಂಡು ಹೋದರು. ನೀವು ಮತ್ತು ಈ ನಿಮ್ಮ ಸ್ನೇಹಿತರು ಎಷ್ಟಕ್ಕೆ ಇನ್ಶೂರ್ ಮಾಡುತ್ತೀರಿ? (ಲೋ ಗೋಪಿ; ನಿಂಬೆಹುಳಿ ಪಾನಕ ಕಂಚಿನ ಲೋಟದಲ್ಲಿ ತಾ, ಎರಡು ಲೋಟ.)

ಸ. ನಾ. ರಾಯರು: ಇವನು ನನ್ನ ಮಗ.

ಮ. ಬ. ರಾಯರು: ನೀವು ನನಗೆ ಮೊದಲೇ ಹೇಳಬಾರದಾಗಿತ್ತೆ ಅದನ್ನ? ತುಂಬ ಒಳ್ಳೇದೇ ಆಯ್ತು. ಸರಾಗವಾಗಿ ಇನ್ಷೂರ್ ಮಾಡಬಹುದು ಹಾಗಾದ್ರೆ.

ಸ. ನಾ. ರಾಯರು: ತಮ್ಮನ್ನೂ ತಮ್ಮ ಕುಟುಂಬವನ್ನೂ ನೋಡಿ ಹೋಗೋಣಾಂತ ಬಂದೆ. ಈಗ ಸದ್ಯಕ್ಕೆ ಇನ್ಷೂರ್ ಮಾಡುವ ಯೋಜನೆ ಇಲ್ಲ. ಇವನಿಗೆ ಮದುವೆ ಮಾಡೋಣ ಅಂತ ಇಲ್ಲಿಗೆ ಬಂದೆ; ಹಾಗೆ ನಿಮ್ಮನ್ನೂ, ನಿಮ್ಮ ಕುಟುಂಬವನ್ನೂ, ನಿಮ್ಮ ಮಕ್ಕಳನ್ನೂ ನೋಡಿಕೊಂಡು ಹೋಗೋಣ ಅಂತ ಬಂದೆ.

ಮ. ಬ. ರಾಯರು: ಸಣ್ಣ ಕುಟುಂಬನ ನಾನೊಬ್ಬ ನೋಡಿದರೆ ಸಾಕಾಗಿದೆ....ಏನೋ ಭಗವಂತನ ದಯದಿಂದ ಆರಲ್ಲಿ ಐದು ಗಂಡುಗಳು ಆಗಲೇ ತಮ್ಮ ಗೂಡು ಮಾಡಿಕೊಂಡಿವೆ....

ಸ. ನಾ. ರಾಯರು: ತಮ್ಮಿಂದ ಉಪಕಾರ ಬೇಡಿ ಬಂದೆ. ತಮ್ಮ ಕುಮಾರಿಯನ್ನು ನನ್ನ ಕುಮಾರನಿಗೆ ಕೊಟ್ಟು....

ಮ. ಬ. ರಾಯರು: ನನಗೆ ಇರುವವರೆಲ್ಲಾ ಕುಮಾರರೇ ತಾನೆ ಸ್ವಾಮಿ? ಕುಮಾರಿಯರು ಇದ್ದಾರೆ ಅಂತ ಯಾರು ಹೇಳಿದರು? ನಿಮಗೆ ಕುಮಾರಿಯರು ಬೇಕಾದರೆ ಆ ತಿರುಮಲೆ ರಾಯನ ಹತ್ತಿರ ಹೋಗಬೇಕಾಗಿತ್ತು. ನಿಮಗೆ ಯಾರು ಹಾಗೆ ಹೇಳಿದ್ದು ನನಗೆ ಆರು ಜನ ಗಂಡುಮಕ್ಕಳು ಅಂತ? ಬೊಗಳೆ ಭಾಗವತ ಹೇಳಿದನೇನು? ಅವನಿಗೆ ಹರಿಕಥೆಯಲ್ಲಿ ಛಾನ್ಸ್ ಕೊಡಲಿಲ್ಲ ನಾನು ಹುಟ್ಟಿದೂರು ಜೋಡಿ ಬಸವನ ಹಳ್ಳಿಯಲ್ಲಿ ಅಂತ ಈ ಬಸವನಹುಳ ಹೀಗೆ ನನ್ನ ಮೇಲೆ ಸೇಡು ತೀರಿಸಿಕೊಳ್ಳೋದೇ, ಸತ್ಯ ನಾರಾಯಣ ರಾಯರೇ? ಸತ್ಯವಾಗಿಯೂ ಹೇಳುತ್ತೇನೆ, ನಿಮ್ಮ ಮಗನನ್ನು ನೀವು ಖಂಡಿತ ತಿರುಮಲ ರಾಯರನ ಮಗಳಿಗೆ ಕೊಡಲೇಬೇಡಿ. ಮನೆಯಲ್ಲಿ ಒಬ್ಬಳು ಕುಂಟಿ; ಇನ್ನೊಬ್ಬಳು ಕಿವುಡಿ; ಮತ್ತೊಬ್ಬಳು ಮೂಗಿ; ಇನ್ನೊಬ್ಬಳು ಯಾವಾಗಲೂ ಕಣ್ಣು ಮಿಟುಕಿಸುತ್ತಲೇ ಇರುತ್ತಾಳೆ; ನಿಮ್ಮ ಹುಡುಗನನ್ನ ಆ ಹುಡುಗಿಗೆ ಗಂಡು ಹಾಕೋಕಿಂತ ಹಾಳು ಭಾವೀಲಿ ತಳ್ಳಿಬಿಡಿ ಪೋಲೀಸನವರ ಎದುರಿಗೇ; ಇಲ್ಲೇ ಗೋಧಿತಿಮ್ಮನ ಹಳ್ಳಿಯಲ್ಲೇ.

ಪೋಲೀಸಿನವರು ಏಕೆ ಎಂದು ಕೇಳಿದರೆ, ನಾನು ಹೇಳಿದೆ ಅಂತ ಹೇಳಿ.
(ತಲೆ ಬಗ್ಗಿಸಿ ಪ. ನಾ. ರಾಯರು ಮಗನೊಂದಿಗೆ ನಿಷ್ಕ್ರಮಣ)

ಮ. ಬ. ರಾಯರು: ಅಂದ ಹಾಗೆ ಇನ್ಷೂರೆನ್ಸ್‌ದು ಮರೀಬೇಡಿ.....

(ತೆರೆ)

## ನಾಲ್ಕನೇ ದೃಶ್ಯ

(ತಿರುಮಲರಾಯರ ಕೋಣೆ. ಹೆಚ್ಚು ಕಡಮೆ ಮಹಾಬಲರಾಯರ ಕೋಣೆ ಯಂತೆಯೇ. ತಿರುಮಲರಾಯರಿಗೆ ಸುಧಾರಕರಾಗಬೇಕೆಂಬ ಹುಚ್ಚು ಹೆಚ್ಚು. ತಿರುಮಲರಾಯರು-ಶತಪಥ ಹಾಕುತಿದ್ದಾರೆ. ಯಾವುದಾದರೂ ಸಭೆಗೆ ಅಧ್ಯಕ್ಷತೆ ಬಗ್ಗೆ ಆಮಂತ್ರಣ ಬರುತ್ತೆ ಎಂದು ಸದಾ ಕಾದಿರುವುದರಿಂದ ಅವರ ಮನೆಬಾಗಿಲು ಯಾವಾಗಲೂ ತೆರೆದೇ ಇರುತ್ತೆ. ಎಡಬಾಗಿಲಿನಿಂದ "ಹೆಜ್ಜೆ ಮೇಲೆ ಹೆಜ್ಜೆ ಇಕ್ಕುತ್ತ" ಹಾಡಿಗೆ ತಕ್ಕಂತೆ ಬ. ನಾ. ರಾಯರು ಮತ್ತು ಅವರ ಮಗಳ ಪ್ರವೇಶ.)

ತಿ. ರಾಯರು: ಬನ್ನಿ ಬನ್ನಿ,.....ಎಲ್ಲಿ ಭಾಷಣ? ಬೆಂಗಳೂರಿಗೋ....ಗುರು ದೇವನ ಹಳ್ಳಿಯಲ್ಲೋ? ಏನು ಮಹಿಳಾಸಮಾಜದಲ್ಲಿ ತಾನೆ? ಇವರು ಯಾರು (ಬ. ನಾ. ರಾಯರನ್ನು ನಿರ್ದೇಶಿಸಿ ಮಹಿಳೆಯನ್ನೇ ಮಾತಾಡಿಸುತ್ತಾ) ಇವರು ಯಾರು, ನಿಮ್ಮ ಸಮಾಜದ ಸೆಕ್ರೆಟರೀನು? (ಆ ಮಗಳನ್ನು ಕೂರು ವಂತೆ ಕುರ್ಚಿ ತೋರಿಸಿ, ಬ. ನಾ. ರಾಯರಿಗೆ ಮೂಲೆಯಲ್ಲಿದ್ದ ಹರಕು ಚಾಪೆ ನಿರ್ದೇಶಿಸಿ) ನಿಮ್ಮ ಸೆಕ್ರೆಟರು ಅಲ್ಲಿ ಕುಳಿತುಕೊಳ್ಳಬಹುದಲ್ಲ. ನಾಡ ಹಬ್ಬಕ್ಕೆ ಆಹ್ವಾನಿಸಲು ಬಂದಿರಾ? ಮಹಿಳಾ ಸಮಾಜ ಅಂತೀರಾ? ಆದ್ದ ರಿಂದ ನೀವೆಲ್ಲಾ ಸಮಾಧಾನವಾಗಿ ಕೇಳುತ್ತೀರಿ ಅಂತ ನನಗೆ ಧೈರ್ಯ. ನೀವು ಗಂಡಸರಂತೆ ಅರ್ಧ ಅರ್ಧದಲ್ಲೇ ಎದ್ದು ಹೋಗೋಲ್ಲ....

ಬ. ನಾ. ರಾಯರು: (ಚಾಪೆಯಿಂದ ಎದ್ದು ನಿಂತು) ರಾಯರೇ........

ತಿ. ಮ. ರಾಯರು: ನೀವೇನೂ ಮಧ್ಯೆ ಮಾತಾಡಬೇಡೀಪ್ಪ. ಸೆಕ್ರೆ ಟರಿ ಅಮ್ಮನವರು ಇರುವಾಗ ನಿಮಗೇಕೆ ಈ ಉದ್ಧಟತನ? (ಮತ್ತೆ ಮಹಿಳೆ ಯನ್ನು ಉದ್ದೇಶಿಸಿ) ನನಗೆ ಗೊತ್ತು ನೀವು ನಾಡಹಬ್ಬಕ್ಕೆ ಬಂದಿದ್ದೀರಿ ಅಂತ. ಲೇ ಚಂಪಕವಲ್ಲಿ, ನಿಮ್ಮ ಸ್ನೇಹಿತರು ಬಂದಿದ್ದಾರೆ ನೋಡು; ಬಟ್ಟಲು ಕಾಫಿ, ತಟ್ಟೆ ಉಪ್ಪಿಟ್ಟು ತೆಗೊಂಡು ಬಾ. ಲೋ ಆಚಾರಿ, ಸೆಕ್ರೆಟರಿಗೂ ಒಂದು ಪ್ಲೇಟು ಚಾಂಡ್ಲೆಗೂ ಉಪ್ಪಿಟ್ಟಿಗೂ ನಡುವೆ ಇರುವ ಶೀಕಲನ್ನು ತೆಗೆದು

ಕೊಂಡು ಬಾ. (ಚಂಪಕವಲ್ಲಿ ಕಾಫಿ ಉಪ್ಪಿಟ್ಟು ತಂದು ಇಡುವಳು. ಆಚಾರಿ ಧಣಿಯು ಅಪ್ಪಣೆಯಂತೆ ಶೀಕಲು ತರುವನು.)

ತಿ. ಮು. ರಾಯರು: ನೋಡಿ, ನಾನು ಇದೇ ಗೋಧಿತಿಮ್ಮನ ಹಳ್ಳಿಯಲ್ಲಿ ಮೊನ್ನೆ "ಹೆಣ್ಣು ಮಕ್ಕಳನ್ನು ಹೆತ್ತ ಮೇಲೆ ತಂದೆಯುವರು ಹೇಗಿರಬೇಕು"ಎಂದು ಮುಹಷೀಯು ಸಮಾಜದಲ್ಲಿ ಮಾನನೀಯು ಭಾಷಣ ಮಾಡಿದೆ. ಮುಹಿಳೆಯುರೇ ತುಂಬ ಜನ ಬಂದಿದ್ದರು ಎನ್ನಿ. ಮುಹಷೀಯರು ಅದರಲ್ಲೂ ಆ ಮುಹಾಬಲರಾಯು, "ಮೂರನೆ ದಿನ ಇವನ ಭಾಷಣ ಹೇಗಿದ್ದರೂ ಪೇಪರಲ್ಲಿ ಬಂದೇ ಬರುತ್ತೆ; ಓದಿಯೋ ಓದುತ್ತೀವಿ" ಅಂತ ಭಾಷಣಕ್ಕೆ ಬರಲೇ ಇಲ್ಲ. ಈಗ ಭಾಷಣ ಕೇಳಲಿಲ್ಲವಲ್ಲ ಅಂತ ಪೇಚಾಡುತ್ತಾ ಇದ್ದಾರೆ ಎನ್ನಿ. ಮೂರನೆ ದಿನ ಪೇಪರಲ್ಲಿ ಮೂರು ಲೈನು ಕೂಡ ನನ್ನ ಭಾಷಣದ ಸಾರಾಂಶ ಪ್ರಕಟವಾಗದೆ,—ಏಕೆ ಹೇಳೋಕೆ ಬಂದೆ ಎಂದ್ರೆ—ನಾನು ಮಾಡಿದ ಭಾಷಣದ ಹಾಗೆಯೇ ನಾನು ಮಕ್ಕಳನ್ನು ಸಾಕಿದ್ದೇನೆ.... ನೋಡಿ, ನೀವು ಈ ಎರಡು ಜಡೆ; ವಾಯಿಲ್ ಸೀರೆ; ಪೊಪ್ಪಳಿ ಬಾಡೀರು ಇವೆಲ್ಲಾ ಬಿಟ್ಟು ಬಿಡಬೇಕು. ನೋಡಿ, ನಮ್ಮ ಚಂಪಕವಲ್ಲಿಯನ್ನೂ ನೋಡಿ. ಅವಳು ನನ್ನ ಭಾಷಣಕ್ಕೆ ಮುಂಚೆ ಕೊಂಡುದು ಎಷ್ಟೋ ಅಷ್ಟೆ. ನನ್ನ ಭಾಷಣ ಅವಳ ಕಿವಿಗೆ ಬಿದ್ದ ಗಳಿಗೆಯಿಂದ ಅವುಗಳಿಗೆ ವೃಥಾ ಹಣ ಸುರಿಯೋದು ನಿಲ್ಲಿಸಿಬಿಟ್ಟಿದ್ದಾಳೆ. ನೋಡಿ, ನೀವು ರಷ್ಯಾ ಸಂಸ್ಕೃತಿ ತಿಳಿದುಕೊಳ್ಳೋಕೆ ಸಾಹಸಪಡೋಕೆ ಮುಂಚೆ ರಂಗೋಲಿ ಹೊಕೋದು ತಿಳಿದಿರಬೇಕು ನಿಮಗೆ. ನೋಡಿ, ನಮ್ಮ ಚಂಪಕವಲ್ಲಿಯನ್ನು ನೋಡಿ. ಚಿತ್ತಾರ ಕೆತ್ತಿದ ಡಬ್ಬಿಯಲ್ಲಿ ಎಷ್ಟು ಚೆನ್ನಾಗಿ ಕಾರಣೆ ಎಳೆಯುತ್ತಾಳೆ! ನಿಮ್ಮ ನಿಮ್ಮ ಕೆಲಸಗಳನ್ನು ನೀವೇ ಮಾಡಬೇಕು! ಸೀರೆಗೇಕೆ ಪ್ರಿಸ್ಸಂಗು; ಜಾಕೆಟ್‌ಗೆ ಏಕೆ ಝುಮ್ಕಿ; ಲಂಗಕ್ಕೇಕೆ ಲೇಸು? ಇಷ್ಟೆಲ್ಲಾ ಹೇಳಿದೆ ಅಂತ ಏನೂ ತಿಳಕೋಬೇಡಿ. ಉಪ್ಪಿಟ್ಟು ತಟ್ಟೆ ಅಲ್ಲೇ ಇಟ್ಟು; ಕಾಫೀಲೆ ಕೈ ತೊಳಕೊಳ್ಳಿ. ರೀ ರೈಟರ್, ನಿಮಗೇರಿ....

ಸರಸು: ಅವರು ರೈಟರಲ್ಲ, ನಮ್ಮ ಫಾದರು.

ಬ. ನಾ. ರಾಯರು: ಹಾಗೋ? ಮೊದಲೇ ಹೇಳಿದ್ದರೆ ಚೆನ್ನಾಗಿತ್ತಲ್ಲ. ಅಪರಾಧವಾಯಿತು. ಕ್ಷಮಿಸಬೇಕು (ಎಂದು ಬ. ನಾ. ರಾಯರನ್ನು) "ಬನ್ನಿ ಬನ್ನಿ, ಇಲ್ಲಿ ಬನ್ನಿ," ಎಂದು ಒಳಗಿಂದ ಒಂದು ಕುರ್ಚಿ ತಂದು

ಹಾಕುವನು.) ಕೂತುಕೊಳ್ಳಿ, ಕೂತುಕೊಳ್ಳಿ, ನೀವೂ ಬರಬೇಕು ನನ್ನ ಭಾಷಣಕ್ಕೆ ನಿಮ್ಮೂರ ನಾಡಹಬ್ಬದಲ್ಲಿ.

ಬ. ನಾ. ರಾಯರು: ಆ ಗ್ರಹಚಾರ ತಲೆಯಲ್ಲಿ ಬರೆದಿದ್ದರೆ ಬರೋಣ ವಂತೆ. ಅದಿರಲಿ. ಹೆಣ್ಣು ಮಕ್ಕಳನ್ನು ಮನೆ ತಂಬ ಇಟ್ಟುಕೊಂಡು ನನಗೆ ಕೋಣೆ ಕೋಣೆಗೂ ಪುತ್ರರು ಎಂದು ಸುಳ್ಳು ಹೇಳಲು ಎಷ್ಟು ಧೈರ್ಯರೀ ನಿಮಗೆ? ನಾವು ಚಿಕ್ಕಮಗಳೂರಿಂದ ಬಂದದ್ದಾಯ್ತು. ಅದೂ ಅಲ್ಲದೆ ಬಾಗಿಲ ಹತ್ತಿರ ದಾಸಯ್ಯ ಕೂಡ ಹೇಳಿದ. ಏನಂತ ಕಾಗದ ಬರೆದಿದ್ದಿರಿ! ಏನು ಮೋಸ! ಏನು ದಗ! ಒಳ್ಳೆ ಚೆನ್ನಾಯ್ತು! ಎಕ್ಸ್‌ಪ್ರೆಸ್ ಕಾಗದದಲ್ಲೇ ಎಕ್ಸ್‌ಪ್ರೆಸ್ ಮಾಡದ್ದೆನಲ್ಲರೀ, ನಿಮ್ಮ ಗಂಡು ಮಕ್ಕಳನ್ನು ಊರಲ್ಲೇ ಇರುವಂತೆ ಹೇಳಿ ಅಂತ?

ತಿ. ಮ. ರಾಯರು: ಅಷ್ಟೊಂದು ಜನ ಗಂಡು ಮಕ್ಕಳಿರೋದು ಈ ಗೋಧಿತಿಮ್ಮನ ಹಳ್ಳಿಯಲ್ಲೆಲ್ಲಾ ಆ ಖತಿಕ್ಯಾತ ಮಹಾಬಲ ರಾಯನೊಬ್ಬನಿ ಗೇನೇನೇ. ನನಗೂ ನಿಮ್ಮ ಹಾಗೇ ಹೆಣ್ಣು ಮಕ್ಕಳು.

ಬ. ನಾ. ರಾಯರು: ನಾನು ಮಹಾಬಲರಾಯರಿಗೆ ಎಂದು ಕಾಗದ ಬರೆದ ಜ್ಞಾಪಕ. ತಿರುಮಲರಾಯರಿಗೆ ಎಂದು ಏನಾದರೂ ಬರೆದು ಬಿಟ್ಟೆನೋ ಏನೋ ಎಂದು ಎನಿಸುತ್ತಾ ಇದೆ ನನಗೆ ಇಲ್ಲಿಗೆ ಬಂದ ಮೇಲೆ.

ತಿ. ಮ. ರಾಯರು: ಎನ್ನಿಸೋದು ಏನು? ಅವರಿಗೆ ಬರೆದೇ ಇದ್ದೀರಿ ನೀವು. ನಾಡಹಬ್ಬದ ಭಾಷಣಕ್ಕೆ ನನ್ನನ್ನೇ ಕರೆಯುತ್ತೀರಿ ಎಂಬ ನಂಬಿಕೆ ಮೇಲೆ ಹೇಳುತ್ತಾ ಇದ್ದೇನೆ. ಆ ಮಹಾಬಲರಾಯನ ಪುತ್ರಶುಂಠಿಗೆ ಎದೆ ಸೀಳಿದರೂ ಎರಡು ಏಕೆ, ಕುರುಡು ಅಕ್ಷರವೂ ಕಾಣಿಸೋಲ್ಲ. ಹನ್ನೆರಡು ರೂಪಾಯಿ ಪರೀಕ್ಷೆಗೆ ಹನ್ನೆರಡು ವರ್ಷಗಳಿಂದ ಹೋಗುತ್ತಾ ಇದ್ದಾನೆ ಆತ. ನಿಮ್ಮ ಮಕ್ಕಳು ಪಾಪ ಭಾಷಣ, ಸಂಸ್ಕೃತಿ, ಕಲೆ ಅಂತ ಇದ್ದಾರೆ. ಅಂಥವ ನಿಗೆ ನಿಮ್ಮ ಮಗಳನ್ನು ಕೊಡುವುದಕ್ಕಿಂತ ಊರ ಚಿಲುಮೆಯಲ್ಲಿ ಎತ್ತಿ ಹಾಕಿಬಿಡಿ. ಹೋಗಿ; ಈಗ ತೂಫಾನ್ ಎಕ್ಸ್‌ಪ್ರೆಸ್ ಈಗ ಹೊರಟಿರುತ್ತೆ, ನಿಮ್ಮೂರಿಗೆ ಹೋಗೋಕೆ. ಬೇಗ ಹೋಗಿ ಬಸ್ಸು ಹತ್ತಿ. (ಬ. ನಾ. ರಾಯರು ಅವರ ಮಗಳ ಜತೆ ನಿಷ್ಕ್ರಮಣ.)

## ಐದನೆಯ ದೃಶ್ಯ

(ಎರಡನೆ ದೃಶ್ಯದಲ್ಲಿ ಕಂಡ ರಸ್ತೆ; ತೆರೆ ಏಳುವುದಕ್ಕೆ ಮುಂಚೆಯೇ ಗಣೇಶ ಶಾಸ್ತ್ರಿಗಳು ಅಲ್ಲಿದ್ದಾರೆ.)

ಗ. ಶಾಸ್ತ್ರಿ: ಹನ್ನೆರಡಾಗುತ್ತಾ ಬಂತು ಗಂಟೆ, ಇವರು ಯಾರೂ ಬರಲೇ ಇಲ್ಲವಲ್ಲ. ಇನ್ನು ಮಧ್ಯಾಹ್ನ ಮನೆಗೆ ಹೋಗಿ, ಮಾಧ್ಯಾಹ್ನಿಕ ಮುಗಿಸಿ, ಊಟಮಾಡಿ, ಮತ್ತೆ ಮಲಗಿ, ಎಷ್ಟು ಕೆಲಸ ಇದೆ ಏನು ಕಥೆ–ಇವರು ಯಾರೂ ಬರಲೇ ಇಲ್ಲ. (ಎಡಬಾಗಿಲಿನಿಂದ ಸ. ನಾ. ರಾಯರು ಮತ್ತು ಸಪ್ಪೆ ಮುಖಹಾಕಿದ ಅವರ ಮಗನ ಪ್ರವೇಶ.)

ಸ. ನಾ. ರಾಯರು: ಇಲ್ಲ ಶಾಸ್ತ್ರಿಗಳೇ, ನಿಮ್ಮನ್ನು ನಂಬಿಕೊಂಡು ಹೋಗಿ, ಉದ್ಧಾರವಾಯಿತು. ಮಹಾಬಲರಾಯನ ಮನೆಗೆ ಹೋಗಿ ಅವನು ಇನ್ಷ್ಯೂರೆನ್ಸ್ ಎಂತ ಪ್ರಾರಂಭಿಸಿಬಿಟ್ಟ....ನೀವಾದರೂ ಹೇಳಬಾರದಿತ್ತೆ ನನಗೆ? ಅವನಿಗೂ ನನ್ನ ಹಾಗೆ ಆರು ಜನ ಗಂಡು ಮಕ್ಕಳು; ಹೆಣ್ಣು ಮಕ್ಕಳೇ ಇಲ್ಲ.........

(ಬಲಗಡೆಯಿಂದ ಬ. ನಾ. ರಾಯರು ಮತ್ತು ತಲೆತಗ್ಗಿಸಿದ ಅವರ ಮಗಳ ಪ್ರವೇಶ.)

ಬ. ನಾ. ರಾಯರು: ಒಳ್ಳೆ ಶಾಸ್ತ್ರಿಗಳ್ರೀ ನೀವು. ನನಗಂತೂ ಭಾಷಣ ಎಂದರೆ ತಲೆ ಚಿಟ್ಟುಹಿಡಿದು ಹೋಗುತ್ತೆ. ಅವನು ಯಾವನೋ ದಾಸಯ್ಯ ಹೇಳಿದ-ತಿರುಮಲರಾಯನಿಗೆ ಆರು ಜನ ಗಂಡು ಮಕ್ಕಳು ಅಂತ, ಅವನ ಮನೆಗೆ ಹೋಗಿ....ಅವನು ನಾಡಹಬ್ಬ, ಕಲೆ, ಸಂಸ್ಕೃತಿ, ಅವನ ಮಕ್ಕಳಿಗೂ ನಾವು ಸಾಕಿದ ಮಕ್ಕಳಿಗೂ ಇರುವ ವ್ಯತ್ಯಾಸ—ಎಲ್ಲ ಭಾಷಣ ಪ್ರಾರಂಭಿಸಿಬಿಟ್ಟ. ನಾನು ದೈತ್ಯರಂತೆ—ಅದಕ್ಕೆ ನನಗೆ ಜಾಂಡ್ಲೆಗೂ ಉಪ್ಪಿಟ್ಟಿಗೂ ನಡುವೆ ಇರುವ ಸೀಕಲು ಸಮರ್ಪಣೆ ಆಚಾರ್ಯ ಸ್ವಹಸ್ತದಿಂದ —ಅವನಿಂದ ತಲೆತಪ್ಪಿಸಿಕೊಂಡು ಬರುವಷ್ಟು ಹೊತ್ತಿಗೆ ಸಾಕುಸಾಕಾಗಿ ಹೋಯಿತು.

ಗ. ಶಾಸ್ತ್ರಿ: ಸತ್ಯನಾರಾಯಣರಾಯರೇ, ಸಾವಧಾನ! ನೀವು ನನ್ನನ್ನು ಏನು ಕೇಳಿದಿರಿ? ಮಹಾಬಲರಾಯನ ಮನೆ ಎಲ್ಲಿ ಅಂತ. ಅಷ್ಟೇ ಹೊರತು ಅವನಿಗೆ ಎಷ್ಟು ಜನ ಗಂಡು ಮಕ್ಕಳು, ಎಷ್ಟು ಜನ ಹೆಣ್ಣು ಮಕ್ಕಳು ಎಂದು ಕೇಳಿದಿರಾ? ನಿಮಗೆ ಭಾಗವತನ ಮಾತೇ ವೇದವಾಕ್ಯವಾಯಿತು.

ಬದರೀ ನಾರಾಯಣರಾಯರೇ, ನೀವು ತನ್ನನ್ನು ತಿರುಮಲರಾಯರ ಮನೆ ಎಲ್ಲಿ ಅಂತ ಕೇಳಿದಿರೇ ಹೊರತು ನಿಮಗೆ ಭಾಷಣ ಎಂದರೆ ಆಗೋಲ್ಲ; ತಿರುಮಲರಾಯರಿಗೆ ಎಷ್ಟು ಜನ ಗಂಡು ಮಕ್ಕಳು ಎಂದು ಕೇಳಿದಿರಾ? ಜಾಗಟೆ ದಾಸಯ್ಯನ ಮಾತೇ ನಿಮಗೆ ಸತ್ಯವಾಯಿತು. ಊರಲ್ಲೇ ನೆಲಸಿರುವ ಗಣೇಶ ಶಾಸ್ತ್ರಿಗಳಂಥವರನ್ನು ಊರ ವಿಚಾರ ಕೇಳಬೇಕೆಂಬುದು ನಿಮಗೆ ಗೊತ್ತಾಗಲಿಲ್ಲವಲ್ಲ.

ಸ. ನಾ. ರಾಯರು: ತಪ್ಪಾಯ್ತು ಶಾಸ್ತ್ರಿಗಳೇ ಈಗ ಊರಿಗೆ ಹೇಗೆ ಹೋಗೋದು ಹೇಳಿ. ಗೋಧಿತಿಮ್ಮನ ಹಳ್ಳಿಯಲ್ಲೂ ಮದುವೆ ನೆರವೇರ ಲಿಲ್ಲ ಎಂದರೆ ಹಿರೇಮಗಳೂರಿನವರು ಎಷ್ಟು ತಮಾಷೆಮಾಡುತ್ತಾರೆ ಅಂತ.

ಬ. ನಾ. ರಾಯರು: ನಂದೂ ಅದೇ ಕೇಸು ಶಾಸ್ತ್ರಿಗಳೇ. ಚಿಕ್ಕಮಗ ಳೂರವರೂ ಕದೀಮರೇ. ನಾನೇ ಕೇಳಿದ್ದರೆ ಗಂಡು ಕೊಡುತ್ತಾ ಇರ ಲಿಲ್ಲವೇ–ಗೋಧಿತಿಮ್ಮನ ಹಳ್ಳಿಗೆ ಹೋಗಿ ಇಲ್ಲ ಎನ್ನಿಸಿಕೊಂಡು ಬರಬೇಕೆ? ಎಂದು ಹಾಸ್ಯಮಾಡುತ್ತವೆ ಆ ಊರಿನ ಹಂದಿಗಳು. ಅದೂ ಅಲ್ಲದೆ ಮದುವೆ ಆದಮೇಲೆ ಸಂನ್ಯಾಸಿ ಆಗೋಣ ಎಂದುಕೊಂಡಿದ್ದೆ ನಾನು. ಈಗ ಸಿನಿಮಾಗೆ ಸೇರೋಣ ಅಂತ ಆಸೆ ಆಗುತ್ತಾ ಇದೆ. ಇಲ್ಲೇ ಏನಾದರೂ ಮಾಡಿ ಸಂಬಂಧ ಕೂಡಿಸಿದರೆ ನಾವೂ ಸತ್ಯನಾರಾಯಣರಾಯರೂ ನಿಮಗೆ ತುಂಬಾ ಆಭಾರಿಗಳಾಗುತ್ತೇವೆ. ಅಲ್ಲವೇ, ಸತ್ಯನಾರಾಯಣರಾಯರೇ?

ಸ. ನಾ. ರಾಯರು: ಓಹೋ, ಸಂಶಯವಿಲ್ಲ. ನಾವಿಬ್ಬರೂ ಸಾವಿರ ರೂಪಾಯಿ ನಿಮಗೆ ಕೊಡಲು ಸಿದ್ಧ. ನಮ್ಮ ಮಕ್ಕಳಿಗೆ ಮದುವೆ ಅಂತ ಒಂದುಮಾಡಿದರೆ!

ಗ. ಶಾಸ್ತ್ರಿ: (ಏನೋ ಯೋಚಿಸುವವನಂತೆ) ಏಕೆ ಸತ್ಯನಾರಾಯಣ ರಾಯರೇ, ನಿಮ್ಮ ಮಗನಿಗೆ ಮದುವೆ ಆಗುವ ವರೆಗೆ ಈ ಜಾಗ ಬಿಟ್ಟು ನೀವು ಕದಲುವುದಿಲ್ಲವೆ?

ಸ. ನಾ. ರಾಯರು: ಇಲ್ಲ.

ಗ. ಶಾಸ್ತ್ರಿ: ನಿಮ್ಮ ಮಗಳಿಗೆ ವರ ದೊರಕುವ ವರೆಗೆ ನೀವು ಇಟ್ಟ ಹೆಜ್ಜೆ ಎತ್ತುವುದಿಲ್ಲ, ಬದರಿ ನಾರಾಯಣರಾಯರೆ?

ಬ. ನಾ. ರಾಯರು: ಹೌದು.

ಗ. ಶಾಸ್ತ್ರಿ: ನಿಮ್ಮ ಮಗಳನ್ನು ಇವರ ಮಗನಿಗೆ ಏಕೆ ಕೊಡಬಾರದು?

ಬ. ನಾ. ಶಾಸ್ತ್ರಿ: ಹಿರಿಯರು; ಶಾಸ್ತ್ರ; ಜಾತಕ.........

ಸ. ನಾ. ರಾಯರು: ಲಗ್ನ.........

ಗ. ಶಾಸ್ತ್ರಿ: ಅವೆಲ್ಲಾ ನೀವೇನು ಯೋಚಿಸಬೇಡಿ. ವರ ವಧು ಮೆಚ್ಚಿದರಾಯಿತು—ಹಿಂದೂ ಕೋಡ್ ಬಿಲ್ ಬಂದಿರುವಾಗ....ಹನ್ನೆರಡುವರೆಗೆ ಒಂದು ಒಳ್ಳೆ ಲಗ್ನ ಇದೆ ಸಿಂಹ ಲಗ್ನ. ನೀವು ಆಗಬಹುದು ಎಂದರೆ ಇಲ್ಲೇ ದೇವಸ್ಥಾನದಲ್ಲಿ ಕನ್ಯಾದಾನ ಮಾಡಿದರಾಯಿತು. ಲಗ್ನಪತ್ರಿಕೆ ಪ್ರಿಂಟಾಗೇ ಬರಬೇಕು ಅಂತ ಏನು? ನೀವು ಹೋಗಿ ಎಲ್ಲ ಸಿದ್ಧಪಡಿಸಿಕೊಳ್ಳಿ. ನಾನು ಇಲ್ಲಿ ನಾಟಕ ನೋಡಲು ನೆರೆದ ಜನರನ್ನೇ ಸಭಾ ತಾಂಬೂಲಕ್ಕೆ ಕರೆದು ಬಿಡುತ್ತೇನೆ. (ತೆರೆ)

# ಪ್ರತಿ ವಾರವೂ ಕೊಂಡುಕೊಳ್ಳಿರಿ!

"ಒಂದಾಣೆ ಮಾಲೆ"ಯು ಪುಸ್ತಕಗಳು, ಪ್ರತಿ ವಾರ ಪ್ರಕಟವಾಗುತ್ತಿವೆ. ಹೊಸ ಹೊಸ ವಿಷಯಗಳ ಮೇಲೆ ಪುಸ್ತಕಗಳು ಹೊರಡುತ್ತಿವೆ. 1954ನೇ ಸಪ್ಟಂಬರದಿಂದ 1956ನೇ ಅಕ್ಟೋಬರ ತಿಂಗಳ ಮೊದಲನೆಯ ವಾರದ ವರೆಗೆ 106 ಪುಸ್ತಕಗಳು ಪ್ರಕಟವಾಗಿದ್ದು, ಇನ್ನೂ ಪ್ರತಿ ವಾರ ಒಂದೊಂದು ಹೊಸ ಪುಸ್ತಕ ಹೊರಡುತ್ತಲೇ ಇದೆ.

106 ಆಣೆಗಳಿಗೆ 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, ಒಟ್ಟು 2256 ಪುಟಗಳನ್ನು ಕೊಟ್ಟಿರುತ್ತದೆ. ಇಷ್ಟು ಮೊಬಲಗಿಗೆ ಇಷ್ಟು ಪುಟಗಳನ್ನು ಬೇರೆ ಎಲ್ಲಿಯೂ ಯಾವ ಪ್ರಕಟಣೆಯೂ ಕೊಟ್ಟಿಲ್ಲ.

ವಿದ್ವಾಂಸರು ಮಾತ್ರ 'ಒಂದಾಣೆಮಾಲೆ'ಗೆ ಬರೆಯುತ್ತಾರೆ. 'ಅಶ್ಲೀಲ' ಎಂಬ ಅಂಶವೇ ಒಂದಾಣೆಮಾಲೆ'ಯ ಪ್ರಕಟಣೆಗಳಲ್ಲಿರುವುದಿಲ್ಲ.

'ಒಂದಾಣೆಮಾಲೆ' ಪುಸ್ತಕಗಳು ಚಿಕ್ಕ ವಿದ್ಯಾರ್ಥಿಗಳಿಂದ ವಯೋವೃದ್ಧರ ವರೆಗೆ, ಪ್ರತಿಯೊಬ್ಬನಿಗೂ ಅವಶ್ಯ ಇವೆ. ಇಷ್ಟು ಸುಲಭ ಬೆಲೆಯಲ್ಲಿ ಇಷ್ಟು ಉತ್ತಮ ಸಾಹಿತ್ಯವು, ಈ ಮೊದಲು ಎಲ್ಲಿಯೂ ಒದಗಿಸಲ್ಪಟ್ಟಿಲ್ಲ.

'ಒಂದಾಣೆ ಮಾಲೆ' ಪುಸ್ತಕಗಳನ್ನು ಟಪ್ಪಾಲು ದ್ವಾರಾ ತರಿಸಿಕೊಳ್ಳುವವರು ರೂ. 4—8—0ನ್ನು ಮನಿಯಾರ್ಡರ್ ಮೂಲಕ ಕಳಿಸತಕ್ಕದ್ದು. ಡಿಪಾಜಿಟ್ ಇಡುವವರು ಮಾತ್ರ ಏಜನ್ಸಿಗಾಗಿ ಬರೆದುಕೊಳ್ಳತಕ್ಕದ್ದು.

ವಾರಕ್ಕೆ ಕೇವಲ ಒಂದಾಣೆ ವ್ಯಯದಿಂದ ಒಂದು ಉತ್ಕೃಷ್ಟ-ಉಪಯುಕ್ತ ಪುಸ್ತಕವನ್ನು ಹೊಂದುವ ಈ ಯೋಜನೆಯ ಸದುಪಯೋಗ ಮಾಡಿಕೊಳ್ಳಿರಿ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ,
ಮಂಗಳೂರು-1

ANNA PUBLICATIONS, CAR STREET, MANGALORE-1.

Edited, Printed & Published by K. V. Shenoy
at The Prabhat Printers, Ltd., Mangalore.